ದತ್ವೇಹ ಲೋಕೇ ಭೋಗಾಂಶ್ಚ ಮುಕ್ತಿಂ ಚಾಽಂತೇ ಪ್ರಯಚ್ಛತಿ ।
ದ್ವೈಪಾಯನಮುಖಾಂಭೋಜಾನ್ನಿಃಸೃತಂ ಶುಭದಂ ಪರಂ ॥ ೨೩೨ ॥
ಇದಂ ವೈ ಸೇತುಮಾಹಾತ್ಮ್ಯಂ ಧರ್ಮರಾಜೋ ಯುಧಿಷ್ಠಿರಃ ।
ಭೀಮಸೇನಾದಿಭಿಃ ಸರ್ವೈರನುಜೈರಪಿ ಸಂವೃತಃ ॥ ೨೩೩ ॥
ನಿಯಮಾಚಾರಸಂಯುಕ್ತಃ ಸಸೈನ್ಯಶ್ಚ ದಿನೇ ದಿನೇ ।
ಶೃಣೋತಿ ಪಠತೋ ಧೌಮ್ಯಮಹರ್ಷೇಃ ಸ್ವಪುರೋಧಸಃ ॥ ೨೩೪ ॥

ಶ್ರೀ ಸೂತ ಉವಾಚ :—

ಭೋಭೋಸ್ತಪೋಧನಾಃ ಸರ್ವೇ ನೈಮಿಷಾಽರಣ್ಯವಾಸಿನಃ ।
ಮತ್ಸಕಾಶಾದಿದಂ ಗುಹ್ಯಂ ಮಹಾತ್ಮ್ಯಂ ಶ್ರುತಿಸಮ್ಮತಂ ॥ ೨೩೫ ॥
ಶ್ರುತಂ ಭವದ್ಭಿರ್ನಿಯತೈರ್ನಿತ್ಯಂ ಪಠತ ಸಾದರಂ ।
ಪಾಠಯಧ್ವಂ ಸ್ವಶಿಷ್ಯೇಭ್ಯೋ ನಿಯತೇಭ್ಯೋ ನಿರಂತರಂ ॥ ೨೩೬ ॥
ಇತ್ಯುಕ್ತ್ವಾ ತಾನ್ಮುನೀನ್ಸೂತೋ ರೋಮಾಂಚಿತಕಲೇವರಃ ।
ಗುರುಂ ಹೃದಾ ಸ್ಮರನ್ವ್ಯಾಸಂ ನನರ್ತಾಽಶ್ರೂಣಿ ವರ್ತಯನ್ ॥ ೨೩೭ ॥
ಅತ್ರಾಂತರೇ ಮಹಾವಿದ್ವಾನ್ಪಾರಾಶರ್ಯೋ ಮಹಾಮುನಿಃ ।
ಆಶು ಪ್ರಾದುರಭೂತ್ತತ್ರ ಶಿಷ್ಯಾಽನುಗ್ರಹಕಾಂಕ್ಷಯಾ ॥ ೨೩೮ ॥
ತಮಾಗತಂ ವಿಲೋಕ್ಯಾಽಥ ಮುನಿಂ ಸತ್ಯವತೀಸುತಂ ।
ಸೂತಃ ಸರ್ವೈಶ್ಚ ಸಹಿತೋ ನೈಮಿಷಾರಣ್ಯವಾಸಿಭಿಃ ॥ ೨೩೯ ॥

---

ಈ ಲೋಕದಲ್ಲಿ ಸುಖಭೋಗಗಳನ್ನು ಕೊಟ್ಟು ಪರಲೋಕದಲ್ಲಿ ಮೋಕ್ಷವನ್ನೀಯುವನು. ವೇದವ್ಯಾಸನ ಮುಖಕಮಲದಿಂದ ಹೊರಟ ಶುಭವನ್ನೀಯುವ ಈ ಸೇತುಮಾಹಾತ್ಮ್ಯವನ್ನು ಯುಧಿಷ್ಠಿರನು ಭೀಮನೇ ಮೊದಲಾದ ತಮ್ಮಂದಿರೊಡನೆ ನಿಯಮಾಚಾರಗಳುಳ್ಳವನಾಗಿ ಸೈನ್ಯದೊಡನೆ ಪ್ರತಿದಿನವೂ ಪುರೋಹಿತರಾದ ಧೌಮ್ಯಮಹರ್ಷಿಗಳಿಂದ ಕೇಳಿರುತ್ತಾನೆ.

೨೩೫–೨೩೬. ಶ್ರೀ ಸೂತನು ಹೇಳುತ್ತಾನೆ:— "ನೈಮಿಷಾರಣ್ಯವಾಸಿಗಳಾದ ಎಲ್ಲೈ ಮುನಿಗಳೇ! ನನ್ನಿಂದ ಕೇಳಿದ ರಹಸ್ಯವೂ, ವೇದಕ್ಕೆ ಸಮಾನವೂ ಆದ ಈ ಮಾಹಾತ್ಮ್ಯವನ್ನು ನಿತ್ಯವೂ ಆದರದಿಂದ ಪಠಿಸಿರಿ. ಜಿತೇಂದ್ರಿಯರಾದ ನಿಮ್ಮ ಶಿಷ್ಯರಿಗೆ ಹೇಳಿರಿ."

೨೩೭–೨೩೮. ಸೂತನು ಹೀಗೆಂದು ಹೇಳಿ ರೋಮಾಂಚಗೊಂಡ ಶರೀರವುಳ್ಳವನಾಗಿ ಗುರುಗಳಾದ ವ್ಯಾಸರನ್ನು ಮನಸ್ಸಿನಿಂದ ಸ್ಮರಿಸುತ್ತ ಕಣ್ಣೀರನ್ನು ಸುರಿಸುತ್ತ ಕುಣಿದನು. ಈ ಮಧ್ಯದಲ್ಲಿ ಜ್ಞಾನಿಗಳಾದ ವ್ಯಾಸಮಹರ್ಷಿಗಳು ಕೂಡಲೆ ಶಿಷ್ಯನಿಗೆ ಅನುಗ್ರಹಮಾಡಲಿಚ್ಛೆಯಿಂದ ಆಗಮಿಸಿದರು.

೨೩೯–೨೪೦. ಸೂತನು ಬಂದಿರುವ ಸತ್ಯವತೀತನಯನಾದ ವ್ಯಾಸಮುನಿ

ವ್ಯಾಸಸ್ಯ ಚರಣಾಂಭೋಜೇ ದಂಡವತ್ಪ್ರಣಿಪತ್ಯ ತು ।
ಜಲಮಾನಂದಜಂ ತತ್ರ ನೇತ್ರಾಭ್ಯಾಂ ಪರ್ಯವರ್ತಯತ್ ॥ ೨೪೦ ॥
ಪ್ರಣತಂ ಪ್ರಿಯಶಿಷ್ಯಂ ತಂ ದೋರ್ಭ್ಯಾಮುತ್ಥಾಪ್ಯ ವೈ ಮುನಿಃ ।
ಆಶೀರ್ಭಿರಭಿನಂದ್ಯೈನಮಾಲಿಂಗ್ಯ ಚ ಮುಹುರ್ಮುಹುಃ ॥ ೨೪೧ ॥
ನೈಮಿಷಾರಣ್ಯಮುನಿಭಿರಾನೀತೇ ಪರಮಾಸನೇ ।
ದ್ವೈಪಾಯನೋ ಮಹಾತೇಜಾ ನಿಷಸಾದ ತಪೋಧನಃ ॥ ೨೪೨ ॥
ಮುನಿಷ್ವಪ್ಯುಪವಿಷ್ಟೇಷು ಸೂತೇಽಪಿ ಚ ನಿಜಾಜ್ಞಯಾ ।
ಶೌನಕಾದೀನ್ಮುನೀನ್ಸರ್ವಾನ್ಶಕ್ತೇಃ ಪೌತ್ರೋಽಭ್ಯಭಾಷತ ॥ ೨೪೩ ॥
ಮಯಾಜ್ಞಾತಮಿದಂ ಸರ್ವಂ ನೈಮಿಷಾಽರಣ್ಯವಾಸಿನಃ ।
ಮಮ ಶಿಷ್ಯೇಣ ಸೂತೇನ ಸೇತುಮಾಹಾತ್ಮ್ಯಮುತ್ತಮಂ ।
ಕಥಿತಂ ಭವತಾಮದ್ಯ ಮಹಾಪಾತಕನಾಶನಂ ॥ ೨೪೪ ॥
ಶ್ರುತೀನಾಂ ಚ ಸ್ಮೃತೀನಾಂ ಚ ಪುರಾಣಾನಾಂ ತಥೈವ ಚ ।
ಶಾಸ್ತ್ರಾಣಾಂ ಚೇತಿಹಾಸಾನಾಮನ್ಯೇಷಾಮಪಿ ಕೃತ್ಸ್ನಶಃ ॥ ೨೪೫ ॥
ಏಷಪರ್ಯವಸನ್ನೋಽರ್ಥೋ ಮಾಹಾತ್ಮ್ಯಂ ಯತ್ತ್ವಿದಂ ಮಹತ್ ।
ಸರ್ವೇಷ್ವಪಿ ಪುರಾಣೇಷು ಇದಂ ಬಹುಮತಂ ಮಮ ॥ ೨೪೬ ॥

---

ಯನ್ನು ಕಂಡು ನೈಮಿಷಾರಣ್ಯವಾಸಿಗಳಾದ ಸಕಲಮುನಿಗಳೊಡನೆ ವ್ಯಾಸನ ಚರಣಕಮಲದಲ್ಲಿ ಸಾಷ್ಟಾಂಗಪ್ರಣಾಮಮಾಡಿ ಕಣ್ಣುಗಳಿಂದ ಆನಂದಬಾಷ್ಪವನ್ನು ಸುರಿಸಿದನು.

೨೪೧–೨೪೨. ವ್ಯಾಸನು ನಮಸ್ಕಾರಮಾಡಿದ ಆ ಪ್ರಿಯಶಿಷ್ಯನನ್ನು ತೋಳುಗಳಿಂದ ಮೇಲಕ್ಕೆಬ್ಬಿಸಿ ಆಶೀರ್ವದಿಸಿ ಬಾರಿಬಾರಿಗೂ ಆಲಿಂಗಿಸಿ ನೈಮಿಷಾರಣ್ಯವಾಸಿಗಳಾದ ಮುನಿಗಳು ತಂದ ಉತ್ತಮಾಸನದಲ್ಲಿ ಕುಳಿತುಕೊಂಡನು.

೨೪೩. ಶಕ್ತಿಯ ಮೊಮ್ಮಗನಾದ ವೇದವ್ಯಾಸನು ತನ್ನ ಅಪ್ಪಣೆಯಂತೆ ಮುನಿಗಳೂ, ಸೂತನೂ ಕುಳಿತುಕೊಳ್ಳಲು ಶೌನಕಾದಿಮುನಿಗಳನ್ನು ಕುರಿತು ಇಂತೆಂದನು.

೨೪೪. "ಎಲೈ ನೈಮಿಷಾರಣ್ಯವಾಸಿಗಳಾದ ಮುನಿಗಳೆ! ನನ್ನ ಶಿಷ್ಯನಾದ ಸೂತನು ನಿಮಗೆ ಮಹಾಪಾತಕವನ್ನು ಪರಿಹರಿಸುವ ಸೇತುಮಾಹಾತ್ಮ್ಯವನ್ನು ಹೇಳಿರುವುದನ್ನು ನಾನು ತಿಳಿದುಕೊಂಡಿರುವೆನು.

೨೪೫–೨೪೬. ಈ ಮಾಹಾತ್ಮ್ಯವು ಶ್ರುತಿ, ಸ್ಮೃತಿ, ಪುರಾಣ, ಶಾಸ್ತ್ರ, ಇತಿಹಾಸಗಳ ಪರಿನಿಶ್ಚಿತವಾದ ಅರ್ಥವಾಗಿರುವುದು. ಸಕಲಪುರಾಣಗಳಲ್ಲಿ ಇದು ನನಗೆ ಗೌರವಾಸ್ಪದವಾದುದು.

ಶೃಣೋತಿ ಧರ್ಮಜೋ ಧೌಮ್ಯಾದಿದಂ ನಿತ್ಯಂ ಮಮಾಜ್ಞಯಾ ।
ಅತೋ ಭವಂತೋಽಪಿ ಸದಾ ಸೇತುಮಾಹಾತ್ಮ್ಯಮುತ್ತಮಂ ॥ ೨೪೭ ॥
ಪಠನ್ತು ಶೃಣ್ವಂತು ತಥಾ ಶಿಷ್ಯಾಣಾಂ ಪಾಠಯಂತು ಚ ।
ತಚ್ಛ್ರುತ್ವಾ ವಚನಂ ತಸ್ಯ ತೇ ಪ್ರಾಹುರ್ಬಾಢಮಿತ್ಯಪಿ ॥ ೨೪೮ ॥
ತತೋ ವ್ಯಾಸೋಽಪಿ ಸೂತೇನ ಶಿಷ್ಯೇಣ ಚ ಸಮನ್ವಿತಃ ।
ಅನುಜ್ಞಾಪ್ಯ ಮುನೀನ್ಸರ್ವಾನ್ಕೈಲಾಸಂ ಪರ್ವತಂ ಯಯೌ ॥ ೨೪೯ ॥
ಋಷಯೋ ನೈಮಿಷಾರಣ್ಯನಿಲಯಾಸ್ತುಷ್ಟಿಮಾಗತಾಃ ।
ಪ್ರತ್ಯಹಂ ಸೇತುಮಾಹಾತ್ಮ್ಯಂ ಶೃಣ್ವಂತಿ ಚ ಪಠಂತಿ ಚ ॥ ೨೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಶ್ರೀ ಸೇತುಮಾಹಾತ್ಮ್ಯ ಪಠನಶ್ರವಣಫಲವರ್ಣನಂ" ನಾಮ ದ್ವಿಪಂಚಾಶತ್ತಮೋಽಧ್ಯಾಯಃ

## ಸೇತುಮಾಹಾತ್ಮ್ಯೇ ಉತ್ತರಾರ್ಧಃ ಸಮಾಪ್ತಃ

---

೨೪೭–೨೪೮. ಧರ್ಮರಾಜನು ನನ್ನ ಅಣತಿಯಿಂದಲೇ ಈ ಮಾಹಾತ್ಮ್ಯೆವನ್ನು ಧೌಮ್ಯರಿಂದ ಕೇಳಿರುತ್ತಾನೆ. ಆದುದರಿಂದ ನೀವೂ ಯಾವಾಗಲೂ ಈ ಉತ್ತಮ ಸೇತುಮಾಹಾತ್ಮ್ಯವನ್ನು ಪಠಿಸಿರಿ, ಕೇಳಿರಿ, ಹಾಗೆಯೇ ಶಿಷ್ಯರಿಗೆ ಹೇಳಿರಿ" ಎಂದು ವ್ಯಾಸನು ಹೇಳಲು ಆ ಮುನಿಗಳು ಹಾಗೆಯೇ ಆಗಲೆಂದು ಹೇಳಿದರು.

೨೪೯. ಬಳಿಕ ವ್ಯಾಸನು ಶಿಷ್ಯನಾದ ಸೂತನೊಡನೆ ಆ ಮುನಿಗಳೆಲ್ಲರ ಅನುಮತಿಯನ್ನು ಪಡೆದು ಕೈಲಾಸಪರ್ವತಕ್ಕೆ ತೆರಳಿದನು.

೨೫೦. ನೈಮಿಷಾರಣ್ಯವಾಸಿಗಳಾದ ಆ ಮುನಿಗಳೂ ಸಹ ಸಂತುಷ್ಟರಾಗಿ ಪ್ರತಿದಿನವೂ ಸೇತುಮಾಹಾತ್ಮ್ಯವನ್ನು ಕೇಳುತ್ತಾರೆ ಮತ್ತು ಪಠಿಸುತ್ತಾರೆ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಸೇತುಮಾಹಾತ್ಮ್ಯ ಪಠನಶ್ರವಣಫಲವರ್ಣನ" ವೆಂಬ ಐವತ್ತೆರಡನೆಯ ಅಧ್ಯಾಯವು ಮುಗಿದುದು

## ಸೇತುಮಾಹಾತ್ಮ್ಯದಲ್ಲಿ ಉತ್ತರಾರ್ಧವು ಮುಗಿದುದು